''ನೀನು ಬೇರೆ ಅಗ್ನಿಯನ್ನು ಪ್ರತಿಷ್ಠಾಪಿಸಬೇಕಿಲ್ಲ. ಹಿಂದೆ ನಿನ್ನ ಹೋಮ ಕುಂಡದಲ್ಲಿ ಅರ್ಧಸುಟ್ಟಿರುವ ಕಟ್ಟಿಗೆಯ ತುಂಡುಗಳಲ್ಲಿ ಅಗ್ನಿಯ ಕಣಗಳು ಉಳಿದಿರುತ್ತದೆ. ಅದನ್ನೇ ಉದ್ದೀಪನಗೊಳಿಸಿ ಅದರಲ್ಲಿ ನಿನ್ನ ಎರಡನೇ ಆಹುತಿಯನ್ನು ಹೋಮಿಸು.''

ಈ ಆಕಾಶವಾಣಿಯ ಆದೇಶ ಕಾಣ್ವನಿಗೆ ಸಮ್ಮತವಾಗಲಿಲ್ಲ. ಇದು ಅಶಾಸ್ತ್ರೀಯ ಎಂದು ಅನಿಸಿತು ಅವನ ಮನಸ್ಸಿಗೆ. ಆದುದರಿಂದ ಅವನು ನಭೋವಾಣಿಯ ಮಾತಿನಂತೆ ನಡೆಯದೆ ಸುಮ್ಮನೇ ಕುಳಿತುಕೊಂಡ. ಆಗ ಪುನಃ ಆಕಾಶವಾಣಿ ಮೊಳಗಿತು. ''ಹಿರಣ್ಯವು ಅಗ್ನಿಯ ಪುತ್ರ. ತಂದೆ ಮಗ ಇಬ್ಬರೂ ಒಂದೇ ಮಗನಿಗೆ ಸಮರ್ಪಿಸಿದರೆ ತಂದೆಗೂ ಸಂತೋಷವಾಗುವುದು. ತಂದೆಗೆ ಕೊಡಬೇಕಾದುದನ್ನು ಮಗನಿಗೆ ಕೊಟ್ಟರೆ ಕೋಟಿಪಟ್ಟು ಫಲ. ಅರ್ಧದಗ್ಧವಾಗಿ ಉಳಿದ ಹೋಮದ ಕಾಷ್ಠಗಳನ್ನು ಪುನಃ ಉದ್ದೀಪಿಸಿ ಅದನ್ನು ಹೋಮಾಗ್ನಿಯನ್ನಾಗಿಸಿದಾಗ ಅದು ಹಿರಣ್ಯ ಎನಿಸುವದು. ಇಂಥ ಹಿರಣ್ಯರೂಪ ಅಗ್ನಿಯಲ್ಲಿ ಆಹುತಿ ನೀಡಿದರೆ ಕೋಟಿಪುಣ್ಯ ಫಲ.'' ಈ ಆಕಾಶವಾಣಿಯು ಅಲ್ಲಿನ ಎಲ್ಲ ಋತ್ವಿಜರಿಗೂ ಒಪ್ಪಿಗೆಯಾಯಿತು. ಅವರೆಲ್ಲರೂ ಆಕಾಶವಾಣಿಯ ಆದೇಶದಂತೆ ಹೋಮಕಾರ್ಯ ನಡೆಸಿದರು. ಅಂದಿನಿಂದ ಕಾಣ್ವಮುನಿಯು ಕೋಟಿಪಟ್ಟು ಪುಣ್ಯಕೊಡುವ ಯಜ್ಞವನ್ನು ಹಿರಣ್ಯಕಾಷ್ಠದಲ್ಲಿ ಮಾಡಿದ ಆ ತೀರ್ಥವು ಕೋಟಿ ತೀರ್ಥ ಎಂದು ಪ್ರಸಿದ್ಧವಾಯಿತು. ಈ ತೀರ್ಥಗಳಲ್ಲಿ ಸ್ನಾನ-ದಾನಗಳನ್ನು ಮಾಡಿದರೆ ಕೋಟಿ ಗುಣ ಪುಣ್ಯಫಲವು ಲಭಿಸುವದು.

## ನಾರಸಿಂಹ ತೀರ್ಥ

**ಬ್ರಹ್ಮ:-** ಪೂರ್ವಕಾಲದಲ್ಲಿ ಹಿರಣ್ಯಕಶಿಪು ಎಂಬ ಮಹಾಬಲಿಷ್ಠನಾದ ಅಷ್ಟೇ ದರ್ಪಿಷ್ಠನಾದ ರಾಕ್ಷಸೇಶ್ವರನು ಇದ್ದ. ಅವನು ತನ್ನ ತಪೋಬಲದಿಂದ ಬ್ರಹ್ಮನಿಂದ ಅನೇಕ ವರಗಳನ್ನು ಪಡೆದು ದೇವತೆಗಳಿಗೂ ದುರ್ಧರ್ಷನಾಗಿ ನಿಂತುಕೊಂಡಿದ್ದ. ಅವನ ಮಗನಾದ ಪ್ರಹ್ಲಾದನು ಶ್ರೀಹರಿಯ ಪರಮಭಕ್ತ. ಆದುದರಿಂದ ಹಿರಣ್ಯಕಶಿಪುನಿಗೆ ಪ್ರಹ್ಲಾದನ ಮೇಲೆ ಬಹಳ ದ್ವೇಷ. ಪ್ರಹ್ಲಾದನನ್ನು ಹರಿಭಕ್ತನಾದುದರಿಂದ ಕೊಂದುಹಾಕಬೇಕೆಂದು ಬಗೆಬಗೆಯಿಂದ ಪ್ರಯತ್ನ ಮಾಡಿದ. ಆದರೆ ಶ್ರೀಹರಿಯ ಅನುಗ್ರಹದಿಂದ ಆ ಪ್ರಹ್ಲಾದ ಎಲ್ಲ ವಿಧವಾದ ಮೃತ್ಯು ಭಯವನ್ನು ಮೆಟ್ಟಿನಿಂತಿದ್ದ. ಆ ಸಮಯದಲ್ಲಿ ಶ್ರೀಹರಿಯು ಅರ್ಧಸಿಂಹ, ಅರ್ಧಮನುಷ್ಯನ ಆಕಾರದಿಂದ ನರಸಿಂಹನಾಗಿ ಹಿರಣ್ಯ ಕಶಿಪುವಿನ ಆಸ್ಥಾನದ ಕಂಭದಿಂದ ತನ್ನ ಸರ್ವತ್ರ ವ್ಯಾಪ್ತಿಯನ್ನು ಪ್ರಕಟಿಸುತ್ತ ಪ್ರಾದುರ್ಭೂತನಾದ. ತನ್ನ ಉಗುರಿನಿಂದ ಹಿರಣ್ಯಕಶಿಪುವನ್ನು ಸಂಹರಿಸಿದ. ಅನಂತರ ತನ್ನ ಮೇಲೆ ಏರಿ ಬಂದ ವೀರಾಗ್ರಣಿಗಳಾದ ಹಿರಣ್ಯಕಶಿಪುವಿನ ಹಿಂಬಾಲಕರಾದ ದೈತ್ಯರನ್ನೆಲ್ಲ ವಧಿಸಿದ. ಸ್ವರ್ಗ, ಭೂಮಿ, ಪಾತಾಳ, ಪರ್ವತ, ಸಮುದ್ರ, ಗ್ರಾಮ, ಪಟ್ಟಣ ಎಲ್ಲ ಕಡೆಯೂ ನಾನಾರೂಪಗಳಿಂದ ನೆಲೆಸಿರುವ ರಾಕ್ಷಸರನ್ನೆಲ್ಲ ನರಸಿಂಹರೂಪಿಯಾದ ನಾರಾಯಣನು ಕೊಂದುಹಾಕಿದ. ಆಕಾಶ, ವಾಯುಲೋಕ, ದ್ಯುತಿರ್ಲೋಕ ಮುಂತಾದ ಸ್ಥಳಗಳಲ್ಲಿ ವ್ಯಾಪಿಸಿರುವ ರಾಕ್ಷಸರೆಲ್ಲರೂ ವಜ್ರಾಯುಧಕ್ಕಿಂತ ಹರಿತವಾದ ನರಸಿಂಹನ ಉಗುರುಗಳಿಂದ ಹತ ಪತಿತರಾಗಿ ಹೋದರು.

ಹೀಗೆ ಹರಿದ್ವೇಷಿಗಳಾದ ದೈತ್ಯಾಧಮರನ್ನೆಲ್ಲ ಇದ್ದಲ್ಲಿ ಹೋಗಿ ಮರ್ದಿಸಿ ಬಂದ ನರಸಿಂಹನು ಗೌತಮೀ ತೀರದ ಆಂಬರ್ಯ ಎಂಬ ಸ್ಥಳಕ್ಕೆ ಬಂದ. ಅಲ್ಲಿ ಒಬ್ಬ ದುರ್ಮದಾಂಧನಾದ ದುಷ್ಟ ದೈತ್ಯನಿದ್ದ. ಅವನ ಹೆಸರೂ ಕೂಡ ಹರಿ ಎಂದೇ ಇದ್ದಿತು.

ಅವನು ಧೈರ್ಯದಿಂದ ನರಸಿಂಹನನ್ನು ಎದುರಿಸಿದ. ಶೌರ್ಯದಿಂದ ಅವರೊಡನೆ ಹೋರಾಡಿದ. ಕೊನೆಗೆ ದೇವತೆಗಳಿಗೂ ಕೂಡ ಮೀರಿನಿಂತ ದುರ್ಜಯನಾದ ಆ ದಾನವನನ್ನು ನರಸಿಂಹದೇವನು ಗೌತಮೀ ನದಿಯ ಉತ್ತರತೀರದಲ್ಲಿ ಸಂಹಾರ ಮಾಡಿದ. ಅಂದಿನಿಂದ ಆ ತೀರ್ಥವು ನಾರಸಿಂಹ ತೀರ್ಥ ಎಂದು ಪ್ರಸಿದ್ಧವಾಯಿತು.

## ಮಗನನ್ನು ಮಾರಿದ. ಪಿಶಾಚನಾಗಿ ತೋರಿದ

**ಬ್ರಹ್ಮ:-** ಬಹಳ ಹಿಂದಿನ ಕಾಲದ ಘಟನೆ. ಸೂಯವ ಎಂಬ ಬ್ರಾಹ್ಮಣನಿಗೆ ದಟ್ಟ ದಾರಿದ್ರ್ಯ ಹುಟ್ಟಿದಂದಿನಿಂದ ಕಡುಬಡತನವು ಅವನನ್ನು ಬೆನ್ನಟ್ಟಿಬಂದಿತ್ತು. ದಯನೀಯ ವಾದ ದಾರಿದ್ರ್ಯದಿಂದ ತೊಳಲಿ ಬಳಲಿದ ಅವನಿಗೆ ಸಂಸಾರವನ್ನು ನಿರ್ವಹಿಸುವದು ಬಹಳೇ ಕಠಿಣ ಕಾರ್ಯವಾಗಿತ್ತು. ಅವನಿಗೆ ಒಬ್ಬನೇ ಒಬ್ಬ ಗಂಡುಮಗ. ಅಜೀಗರ್ತಿ ಎಂದು ಅವನ ಹೆಸರು. ಅಜೀಗರ್ತಿಗೆ ಬಡತನ ತಂದೆಯಿಂದಲೇ ಬಳುವಳಿಯಾಗಿ ಬಂದಿತ್ತು ತಂದೆಗಿಂತ ಮಗನಾದ ಅಜೀಗರ್ತಿಯ ಕುಟುಂಬ ಇನ್ನೂ ದೊಡ್ಡದು. ಅವನಿಗೆ ಮೂರು ಗಂಡು, ಶುನಃ ಪುಚ್ಛ, ಶುನಶ್ಶೇಪ ಮತ್ತು ಶುನೋಲಾಂಗೂಲ. ಈ ಮೂರೂ ಮಕ್ಕಳೂ ಸದಾಚಾರಸಂಪನ್ನರು. ಅಧ್ಯಾತ್ಮವಿದ್ಯೆಯಲ್ಲಿ ನಿಪುಣರು. ಆದರೆ ಯಾರಿಗೂ ಧನಸಂಪಾದನೆಯ ಕಲೆ ಗೊತ್ತಿಲ್ಲ. ಬೆಳೆದ ಸಂಸಾರದಲ್ಲಿ ಇಷ್ಟು ಜನ ಮಕ್ಕಳಿಗೂ ತಮಗೂ ಹೊಟ್ಟೆತುಂಬಿ ಕೊಳ್ಳುವದೇ ಅಜೀಗರ್ತನಿಗೆ ದೊಡ್ಡ ಸಮಸ್ಯೆಯಾಯಿತು. ಕೊನೆಗೆ ಅವನು ಯಜ್ಞದಲ್ಲಿ ಬಲಿಕೊಡಲಿಕ್ಕಾಗಿ ಹಣ ತೆಗೆದುಕೊಂಡು ತನ್ನ ಮಗನನ್ನು ಮಾರಲು ನಿರ್ಧರಿಸಿದ. ಹಿರಿಯ ಮಗನನ್ನು ಮಾರಲು ತಂದೆಯಾದ ತನಗೆ ಇಷ್ಟವಿರಲಿಲ್ಲ. ಕೊನೆಯ ಮಗನನ್ನು ಮಾರಲು ತಾಯಿಗೆ ಮನಸ್ಸು ಇರಲಿಲ್ಲ. ನಡುವಿನವನಾದ ಶುನಶ್ಶೇಫನನ್ನು ಹೇರಳ ಹಣ ತೆಗೆದುಕೊಂಡು ಸಿರಿವಂತನಾದ ಓರ್ವ ಕ್ಷತ್ರಿಯ ರಾಜಕುಮಾರನಿಗೆ ಮಾರಿದ. ಪ್ರಭೂತವಾದ ದ್ರವ್ಯವನ್ನು ಕೊಟ್ಟು ಆ ಕ್ಷತ್ರಿಯರಾಜ ಪುತ್ರ ಈ ಬ್ರಾಹ್ಮಣಕುಮಾರನನ್ನು ತನ್ನ ಯಜ್ಞಭೂಮಿಗೆ ಕರೆದೊಯ್ದ. ಅವನ ತಂದೆ ವರುಣನಿಗೆ ಪುತ್ರ ಬಲಿಯನ್ನು ಕೊಡುತ್ತೇನೆಂದು ಹರಕೆ ಹೊತ್ತಿದ್ದ. ಆ ಪುತ್ರನಿಗೆ ತಂದೆಯ ಹರಕೆ ಗೊತ್ತಾಗಿ ಅವನು ಅಡವಿಗೆ ಹೋಗಿ ಅಜೀಗರ್ತನಿಗೆ ಬೇಡಿದಷ್ಟು ದ್ರವ್ಯಕೊಟ್ಟು ತನ್ನ ಬದಲಾಗಿ ಬಲಿಕೊಡಲು ಶುನಶ್ಶೇಫನನ್ನು ಹಿಡಿದುಕೊಂಡು ಬಂದ. ಆದರೆ ಯಜ್ಞಮಂಟಪದಲ್ಲಿ ನೆರೆದ ಯಾವ ಋತ್ವಿಜರೂ ಬ್ರಾಹ್ಮಣಕುಮಾರನನ್ನು ಕಡಿಯಲು ಸಿದ್ಧರಾಗಲಿಲ್ಲ. ಯಜ್ಞದಲ್ಲಿ ಪಶುವನ್ನು ಕಡಿಯಲು 'ಶಮಿತ್ರ' ಎಂಬ ಋತ್ವಿಜನು ಇರುತ್ತಾನೆ. ಅವನು ಕುರಿ ಅಥವಾ ಬೇರೆ ಪಶುವನ್ನು ಕಡಿದು ಯಜ್ಞದಲ್ಲಿ ಆಹುತಿ ನೀಡುತ್ತಾನೆ. ಆದರೆ ಈಗ ಬ್ರಾಹ್ಮಣಕುಮಾರನನ್ನೇ ಹಿಡಿದು ತಂದು ಪಶುವನ್ನಾಗಿ ಮಾಡಿದ್ದ ರಾಜಪುತ್ರ ತನ್ನ ಬದಲು ಅವನನ್ನು ಕಡಿಯುವ ಪ್ರಸಂಗ ಬಂದದ್ದರಿಂದ ಶಮಿತ್ರನ ಆ ಕ್ರೂರಕೃತ್ಯವನ್ನು ಮಾಡಲು ಯಾವ ಋತ್ವಿಜರೂ ಒಪ್ಪಲಿಲ್ಲ. ಆಗ ರಾಜಕುಮಾರನು ಮತ್ತೆ ಶುನಶ್ಶೇಫನ ತಂದೆಯಾದ ಅಜೀಗರ್ತನ ಬಳಿಗೆ ಹೋದ. ಅವನಿಗೆ ಅಧಿಕಾಧಿಕವಾಗಿ ಬೇಡಿದಷ್ಟು ಹಣ ಸುರುವಿ ಅವನನ್ನು 'ಶಮಿತ್ರ'ನಾಗಲು ಒಪ್ಪಿಸಿ ಕರೆತಂದ. ಬ್ರಾಹ್ಮಣಾಧಮನಾದ ಅಜೀಗರ್ತನು ಧನಲೋಭದಿಂದ ತನ್ನ ಮಗನನ್ನೇ ಕಡಿಯಲು ಮುಂದಾದ. ಆಗ ಭಯಭ್ರಾಂತನಾದ ಶುನಶ್ಶೇಫನು ಮಹರ್ಷಿ ವಿಶ್ವಾಮಿತ್ರರಿಗೆ ಶರಣು ಹೋದ. ಆಗ ವಿಶ್ವಾಮಿತ್ರರು ಅವನ ಮೇಲಿನ ಕರುಣೆಯಿಂದ ಅವನಿಗೆ ಎರಡು ವೇದಮಂತ್ರಗಳನ್ನು ಉಪದೇಶಿಸಿದರು. ಮತ್ತು ಅವನನ್ನು ತಮ್ಮ ಮಗನೆಂದು ಪರಿಗಣಿಸಿ